ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಪಶುಪಾಲನಾ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಬಗ್ಗೆ

ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) :-

691 (679) ಮಾನ್ಯ ಪಶುಸಂಗೋಪನೆ ಹಾಗೂ ಹಜ್ಜ್ ಮತ್ತು ವಕ್ಫ್ ಸಚಿವರು ಈ ವಿಷಯವನ್ನು ದಯವಿಟ್ಟು ತಿಳಿಸುವರೆ:-

(ಅ) ಪಶುಪಾಲನಾ ಇಲಾಖೆಯಲ್ಲಿ ಎಷ್ಟು ಹುದ್ದೆಗಳು ಖಾಲಿ ಇವೆ; ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ;

(ಆ) ಪಶುಪಾಲನಾ ಇಲಾಖೆಯಲ್ಲಿ ಪ್ರಭಾರ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಎಷ್ಟು; ಯಾವ ಯಾವ ವೃಂದಕ್ಕೆ ಸೇರಿದವರು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಖಾಲಿ ಮತ್ತು ಪ್ರಭಾರ ಹುದ್ದೆಗಳು ಹೆಚ್ಚಾಗಿರುವುದರಿಂದ ರೈತರ ಜಾನುವಾರುಗಳಿಗೆ ಸೂಕ್ತ ಸಮಯದಲ್ಲಿ ಚಿಕಿತ್ಸೆ ನೀಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ರಾಜ್ಯದಲ್ಲಿರುವ ಎಲ್ಲಾ ತಾಲ್ಲೂಕಿನ ಪಶುಚಿಕಿತ್ಸಾಲಯ ಆಸ್ಪತ್ರೆಗಳಲ್ಲಿ ಸಹಾಯಕ ನಿರ್ದೇಶಕರಿಗೆ ಸಂಚಾರಿ ವಾಹನಗಳು ಇದೆಯೇ; ಇಲ್ಲವಾದಲ್ಲಿ, ಯಾವ ಕಾರಣಕ್ಕಾಗಿ ನೀಡಿರುವುದಿಲ್ಲ; ಇದ್ದಲ್ಲಿ ಯಾವ ವಿಧದ ಸಂಚಾರಿ ವಾಹನಗಳನ್ನು ಒದಗಿಸಲಾಗಿದೆ; ಇವುಗಳು ಉಪಯೋಗಿಸಲು ಯೋಗ್ಯವಾಗಿವೆಯೇ?